# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 615

ಮಾನ್ಯ ಸದಸ್ಯರ ಹೆಸರು : ಶ್ರೀ ಹೆಚ್.ಎಂ.ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 21-02-2022

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ವಿವಿಧ ಪ್ರವಾಸಿ ಕ್ಷೇತ್ರಗಳಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಆಯೋಜಿಸಿದ ವಿವಿಧ ಉತ್ಸವಗಳು ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಕಳೆದ ವರ್ಷ ವ್ಯಯವಾದ ಒಟ್ಟು ಹಣವೆಷ್ಟು; (ವಿವರ ನೀಡುವುದು) | ರಾಜ್ಯದ ಪ್ರವಾಸಿ ತಾಣಗಳ ಉತ್ತೇಜನಕ್ಕಾಗಿ ಕಳೆದ ವರ್ಷ ಆಯೋಜಿಸಲಾದ ವಿವಿಧ ಉತ್ಸವ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ವ್ಯಯವಾದ ಹಣದ ವಿವರವು ಕೆಳಗಿನಂತಿದೆ. (ರೂ.ಲಕ್ಷಗಳಲ್ಲಿ) |

| ಕ್ರ. ಸಂ. | ಉತ್ಸವ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು | ಮೊತ್ತ |
|---|---|---|
| 1 | ವಿಜಯನಗರ ಹಂಪಿ - Indian National Rally Championship Round 4 -Rally Hampi -- ಪ್ರಾಯೋಜಕತ್ವ | 15.00 |
| 2. | ಬೆಂಗಳೂರು ರಂಗಶಂಕರ ಥಿಯೇಟರ್ ಫೆಸ್ಟಿವಲ್ - 2020 - ಪ್ರಾಯೋಜಕತ್ವ | 10.00 |
| 3. | ಚಿಕ್ಕಮಗಳೂರು - The Rally of Chikkamagluru 2021 – ಪ್ರಾಯೋಜಕತ್ವ | 5.00 |
| 4. | ಬೆಂಗಳೂರು ವರ್ಚ್ಯುಯಲ್ ಟೆಕ್ ಸಮ್ಮಿಟ್-2021- ಪ್ರಾಯೋಜಕತ್ವ | 8.85 |
| 5. | ವಿಧಾನಸೌಧದಿಂದ ನಂದಿ ಬೆಟ್ಟದವರೆಗೆ ಬೈಕ್ ರಾಲಿ ಆಯೋಜನ (ಕೆಎಸ್‌ಟಿಡಿಸಿ) | 1.00 |
| 6. | ವಿಶ್ವ ಪ್ರವಾಸೋದ್ಯಮ ದಿನಾಚರಣೆಯ ಆಚರಣೆ (30 ಜಿಲ್ಲೆಗಳಲ್ಲಿ) | 7.50 |
| 7. | Connect Programme (ಕ್ಯೆಟ್ ಪೂರ್ವಭಾವಿ ಸಭೆ) ಕೆಟಿಎಸ್ | 20.00 |
| 8. | ಐಟಿಎಂ- ಚೆನ್ನೈ ಮೇಳ | 23.91 |
| 9 | ಐಐಟಿಎಂ ಬೆಂಗಳೂರು ಮೇಳ | 55.76 |
| 10. | ಸಾಟ್ಟೆ ನವದೆಹಲಿ ಮೇಳ | 39.72 |
| 11. | ಉಡುಪಿ ಹಾಗೂ ದಕ್ಷಿಣ ಕನ್ನಡ ಕಂಬಳ ಉತ್ಸವಕ್ಕೆ ತಲಾ ರೂ.50.00ಲಕ್ಷಗಳು | 100.00 |
| | ಒಟ್ಟು | 286.74 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಚಾರಿತ್ರಿಕ ಪ್ರವಾಸಿ ತಾಣಗಳಾದ ಚಿತ್ರದುರ್ಗ, ಹಂಪಿ, ಬನವಾಸಿ, ಬಾದಾಮಿ ಮುಂತಾದ ಕಡೆಗಳಲ್ಲಿ ಪ್ರವಾಸಿಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ | ಬಂದಿದೆ. 2020 ಮತ್ತು 2021 ರಲ್ಲಿ ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನಲೆಯಲ್ಲಿ ಎಲ್ಲಾ ಜಿಲ್ಲೆಯ ಪ್ರವಾಸಿ ತಾಣಗಳಲ್ಲಿಯೂ ಪ್ರವಾಸಿಗರ ಸಂಖ್ಯೆ ಇಳಿಮುಖವಾಗಿರುತ್ತದೆ. ಪ್ರೇಕ್ಷಣೀಯ ಸ್ಥಳಗಳಲ್ಲಿ ಸರ್ಕಾರದ ಮಾರ್ಗಸೂಚಿಗಳನ್ವಯ "CAB' (Covid Appropriate Behavior) ಗಳನ್ನು ಪಾಲಿಸಿ, ಪ್ರವಾಸಿ ತಾಣಗಳನ್ನು ತೆರೆಯಲಾಗಿದ್ದು, ಎಲ್ಲಾ ಪ್ರವಾಸಿ ತಾಣಗಳಲ್ಲಿಯೂ ಕೋವಿಡ್-19 ಮುಂಜಾಗ್ರತಾ ಕ್ರಮಗಳನ್ನು ಅನುಸರಿಸುತ್ತಿರುವ ಹಿನ್ನೆಲೆಯಲ್ಲಿ ಪ್ರವಾಸಿಗರ ಸಂಖ್ಯೆ ಏರಿಕೆಯಾಗುತ್ತಿದೆ ಮತ್ತು ಪ್ರವಾಸಿಗರನ್ನು ಆಕರ್ಷಿಸಲು ಇಲಾಖೆಯಿಂದ ರಾಜ್ಯ, ಅಂತರ್ ರಾಜ್ಯ ಹಾಗೂ ವಿದೇಶಗಳಲ್ಲಿ "ರೋಡ್ ಷೋ ಹಾಗೂ ಇತರೆ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ರಾಜ್ಯದ ಪ್ರವಾಸಿ ತಾಣಗಳಲ್ಲಿ ಸೂಕ್ತ ಮೂಲಸೌಕರ್ಯಗಳಿಲ್ಲದಿರುವ ಬಗ್ಗೆ ದೂರುಗಳು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಯಾವ ಕ್ರಮ ಕೈಗೊಂಡಿದೆ; ಕರ್ನಾಟಕದ ಇಕೋ ಟೂರಿಸಂ ಅಭಿವೃದ್ಧಿಗೆ ಪ್ರವಾಸೋದ್ಯಮ ಇಲಾಖೆ ಯಾವ ಕ್ರಮ ಕೈಗೊಂಡಿದೆ; (ಮಾಹಿತಿ ನೀಡುವುದು) | ರಾಜ್ಯದ ಪ್ರವಾಸಿ ತಾಣಗಳಲ್ಲಿ ಸೂಕ್ತ ಮೂಲಸೌಕರ್ಯಗಳಿಲ್ಲದಿರುವ ಕುರಿತು ಪ್ರಸ್ತಾವನೆಗಳು ಸ್ವೀಕೃತವಾಗುತ್ತಿದ್ದು, ಪ್ರಸ್ತುತ 2020-26 ನೂತನ ಪ್ರವಾಸೋದ್ಯಮ ನೀತಿಯಲ್ಲಿ ಗುರುತಿಸಿರುವ 78 ಆದ್ಯತಾ ಪ್ರವಾಸಿ ತಾಣಗಳ ಮೂಲಸೌಲಭ್ಯ ಅಭಿವೃದ್ಧಿಗೆ ಮತ್ತು ರಾಜ್ಯದ ಇತರೆ 778 ಪ್ರವಾಸಿ ತಾಣಗಳ ಮೂಲಸೌಲಭ್ಯ ಅಭಿವೃದ್ಧಿಗೆ ಆದ್ಯತೆ ನೀಡುವುದರೊಂದಿಗೆ, ಸ್ವೀಕೃತವಾಗುವ ದೂರು/ಪ್ರಸ್ತಾವನೆಗಳನ್ನು ಇಲಾಖೆಯು ಪರಿಶೀಲಿಸಿ ಆಯವ್ಯಯದಲ್ಲಿ ಒದಗಿಸಿರುವ ಅನುದಾನದ ಲಭ್ಯತೆಗೆ ಅನುಗುಣವಾಗಿ ಮೂಲಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುವುದು.<br><br>2020-26ರ ನೂತನ ಪ್ರವಾಸೋದ್ಯಮ ನೀತಿಯಲ್ಲಿ ಅಳವಡಿಸಿರುವಂತೆ, ಕರ್ನಾಟಕದಲ್ಲಿ ಪರಿಸರ ಪ್ರವಾಸೋದ್ಯಮದ ಅಭಿವೃದ್ಧಿ ಮತ್ತು ಉತ್ತೇಜನಕ್ಕೆ ಸಂಬಂಧಿಸಿದಂತೆ ಜಂಗಲ್ ಲಾಡ್ಜ್ಸ್ ಮತ್ತು ರೆಸಾರ್ಟ್ಸ್ ಲಿಮಿಟೆಡ್ (ಜೆಎಲ್‌ಆರ್) ಅನ್ನು ನೋಡೆಲ್ ಏಜೆನ್ಸಿಯನ್ನಾಗಿ ಮಾಡಲಾಗಿದೆ. ಪರಿಸರ ಪ್ರವಾಸೋದ್ಯಮದಲ್ಲಿ ಪ್ರಕೃತಿ ಪ್ರವಾಸೋದ್ಯಮ ಮತ್ತು ವನ್ಯಜೀವಿ ಪ್ರವಾಸೋದ್ಯಮವೂ ಸೇರಿರುತ್ತದೆ. ಪರಿಸರ ಪ್ರವಾಸೋದ್ಯಮದ ಕಾರ್ಯಚಟುವಟಿಕೆಗಳು, ಜೀವ ವೈವಿಧ್ಯತೆ ಮತ್ತು ಸ್ವಾಭಾವಿಕ ಪರಿಸರದ ಸಂರಕ್ಷಣೆ ಮತ್ತು ಸುಸ್ಥಿರತೆಯ ಬಗ್ಗೆ ಜಾಗೃತಿಯನ್ನು ಮೂಡಿಸುವುದರ ಮೇಲೆ ಕೇಂದ್ರೀಕೃತವಾಗಿರುತ್ತದೆ. ತಾಣಗಳ ಸಾಮರ್ಥ್ಯ (Destination carrying capacity) ಮತ್ತು ಕರ್ನಾಟಕ ಸರ್ಕಾರ ಹಾಗೂ ಸಂಬಂಧಪಟ್ಟ ಪ್ರಾಧಿಕಾರಗಳು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ಮಾರ್ಗಸೂಚಿಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದ ತರುವಾಯ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮತ್ತು ಉತ್ತೇಜನ ಕಾರ್ಯ ಕೈಗೊಳ್ಳಲಾಗುವುದು. ಕರ್ನಾಟಕದಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಹಾಗೂ ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯ (Karnataka Eco-Tourism Board) ನಿಕಟ ಸಹಭಾಗಿತ್ವದೊಂದಿಗೆ ಪರಿಸರ ಪ್ರವಾಸೋದ್ಯಮವನ್ನು ಪ್ರೋತ್ಸಾಹಿಸಲಾಗುವುದು. |
| ಈ) | ರಾಜ್ಯದ ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಪ್ರವಾಸೋದ್ಯಮದ ಸಮಗ್ರ ಅಭಿವೃದ್ಧಿಗೆ ಸರ್ಕಾರದ ಬಳಿ ಯಾವ ಹೊಸ ಯೋಜನೆಗಳಿವೆ? (ಮಾಹಿತಿ ನೀಡುವುದು) | ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |

TOR 27 TDV 2022

(ಆನಂದ್ ಸಿಂಗ್)
ಪ್ರವಾಸೋದ್ಯಮ,
ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಚುಕ್ಕೆ ಗುರುತಿಲ್ಲದ ಪ್ರ.ಸಂ. 615 ಕ್ಕೆ

**ಅನುಬಂಧ**

ರಾಜ್ಯದ ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಪ್ರವಾಸೋದ್ಯಮದ ಸಮಗ್ರ ಅಭಿವೃದ್ಧಿಗೆ 2020-2025 ರ ನೂತನ ಪ್ರವಾಸೋದ್ಯಮ ನೀತಿಯಲ್ಲಿ ಅನೇಕ ಯೋಜನೆಗಳನ್ನು ರೂಪಿಸಲಾಗಿದೆ.

1. **<u>ಚಾರಿತ್ರಿಕ ಪ್ರವಾಸೋದ್ಯಮ</u>**: ಕರ್ನಾಟಕದ ಶ್ರೀಮಂತ ಪರಂಪರೆಯು, ಕರ್ನಾಟಕದ ಪ್ರವಾಸೋದ್ಯಮಕ್ಕೆ ಬಲವಾದ ಜಾಗತಿಕ ಸ್ಥಾನಮಾನವನ್ನು ಕಲ್ಪಿಸುವಲ್ಲಿ ಪ್ರಮುಖ ಚಾಲಕ ಶಕ್ತಿಯಾಗಿದೆ. ಕರ್ನಾಟಕ ಪ್ರವಾಸೋದ್ಯಮವು ರಾಜ್ಯದಲ್ಲಿ ಪಾರಂಪರಿಕ ಪ್ರವಾಸೋದ್ಯಮದ ಅಭಿವೃದ್ಧಿ ಮತ್ತು ಉತ್ತೇಜನಕ್ಕಾಗಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಮತ್ತು ಪುರಾತತ್ವ, ಸಂಗ್ರಹಾಲಯಗಳು ಹಾಗೂ ಪರಂಪರೆ ಇಲಾಖೆಯೊಂದಿಗೆ ಸಹಯೋಗವನ್ನು ಪಡೆಯಲು ಪ್ರಯತ್ನಿಸಲಾಗುತ್ತಿದೆ. ಯೋಜನೆ ಮತ್ತು ಅಭಿವೃದ್ಧಿ ಕಾರ್ಯ ಚಟುವಟಿಕೆಗಳಲ್ಲಿ ಕರ್ನಾಟಕ ಪರಂಪರೆಯ ಸಂರಕ್ಷಣೆ ಮತ್ತು ಸುರಕ್ಷತೆ ಮತ್ತು ಉತ್ತೇಜನಕ್ಕೆ ಹೆಚ್ಚಿನ ಪರಿಗಣನೆಯನ್ನು ನೀಡಲಾಗಿದೆ ಎಂಬುದನ್ನು ಖಚಿತಪಡಿಸಲು ನಗರಾಭಿವೃದ್ಧಿ ಇಲಾಖೆ, ನಗರ ಮತ್ತು ಪಟ್ಟಣ ಯೋಜನಾ ನಿರ್ದೇಶನಾಲಯ ಮತ್ತು ಇತರ ಸಂಬಂಧಪಟ್ಟ ಪ್ರಾಧಿಕಾರಿಗಳು ಮತ್ತು ಏಜೆನ್ಸಿಗಳಿಗೆ ಸೂಕ್ತ ಶಿಫಾರಸ್ಸುಗಳನ್ನು ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.

- <u>ಪಾರಂಪರಿಕ ಪ್ರವಾಸೋದ್ಯಮ ಅಭಿವೃದ್ಧಿಗೆ ಪ್ರಾಯೋಗಿಕ ಯೋಜನೆ:</u>

ಕರ್ನಾಟಕ ಪ್ರವಾಸೋದ್ಯಮವು ರಾಜ್ಯದ 4-5 ಪಾರಂಪರಿಕ ಪ್ರವಾಸೋದ್ಯಮ ತಾಣಗಳನ್ನು ಅವುಗಳ ಪೂರ್ಣ ಸಾಮರ್ಥ್ಯಕ್ಕೆ ತಕ್ಕಂತೆ ಅಭಿವೃದ್ಧಿಪಡಿಸಲು ಪ್ರಾಯೋಗಿಕ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಕ್ರಮವಹಿಸಲಾಗುವುದು.

- <u>ವಿಶ್ವ ಪಾರಂಪರಿಕ ತಾಣಗಳು:</u>

ಕರ್ನಾಟಕದಲ್ಲಿ ಮೂರು UNESCO ವಿಶ್ವ ಪಾರಂಪರಿಕ ತಾಣಗಳಿವೆ. ಮತ್ತಷ್ಟು ಪಾರಂಪರಿಕ ಸ್ಥಳಗಳನ್ನು, ಗಮನಾರ್ಹ ರೀತಿಯಲ್ಲಿ ಅಂತರರಾಷ್ಟ್ರೀಯ ಮಾನ್ಯತೆ ತರುವ ಮೂಲಕ ಮತ್ತು ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಆಕರ್ಷಿಸುವ ಮೂಲಕ, ಅವುಗಳನ್ನೂ ಸಹ UNESCO ವಿಶ್ವ ಪಾರಂಪರಿಕ ಸ್ಥಳಗಳ ಪಟ್ಟಿಯಲ್ಲಿ ಸೇರಿಸಲು ಪ್ರಯತ್ನಿಸಲಾಗುತ್ತಿದೆ.ಈ ಹಿನ್ನಲೆಯಲ್ಲಿ ಬೇಲೂರು, ಹಳೇಬೀಡು, ಸೋಮನಾಥಪುರ ಹೊಯ್ಸಳ ಸ್ಮಾರಕಗಳು UNESCO ಪಟ್ಟಿಯ ತಾತ್ಕಾಲಿಕ ಪಟ್ಟಿಯಲ್ಲಿ ಸೇರಿವೆ.

- <u>ಪಾರಂಪರಿಕ ಸ್ಥಳಗಳ ದಾಖಲೀಕರಣ:</u>

ಕರ್ನಾಟಕ ಪ್ರವಾಸೋದ್ಯಮವು ಸಂಬಂಧಪಟ್ಟ ಪ್ರಾಧಿಕಾರಗಳ ಸಹಯೋಗದೊಂದಿಗೆ ರಾಜ್ಯದಲ್ಲಿ ಪಾರಂಪರಿಕ ಮಹತ್ವವುಳ್ಳ ಎಲ್ಲಾ ಸ್ಥಳಗಳನ್ನು ದಾಖಲೀಕರಿಸಲು ಪ್ರಯತ್ನಿಸಲಾಗುತ್ತಿದೆ.

- <u>ಪಾರಂಪರಿಕ ಪ್ರವಾಸಿ ವಲಯಗಳ ಅಭಿವೃದ್ಧಿ:</u>

ಕರ್ನಾಟಕ ಪ್ರವಾಸೋದ್ಯಮವು ಪ್ರಮುಖ ಪಾರಂಪರಿಕ ನೆಲೆಗಳಲ್ಲಿ ಪಾರಂಪರಿಕ ಪ್ರವಾಸೋದ್ಯಮದ ಸಮಗ್ರ ಮತ್ತು ಸುಸ್ಥಿರ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಕರ್ನಾಟಕದಲ್ಲಿ ರಾಜ್ಯ ಏಜೆನ್ಸಿಗಳ ಸಹಯೋಗದೊಂದಿಗೆ ಪ್ರವಾಸಿ ಸ್ಥಳಗಳ ಸುತ್ತಲೂ ಪಾರಂಪರಿಕ ಪ್ರವಾಸೋದ್ಯಮ ವಲಯಗಳನ್ನು ಸ್ಥಾಪಿಸಲು ಕ್ರಮವಹಿಸಲಾಗುತ್ತಿದೆ.

- <u>ಪಾರಂಪರಿಕ ಮಹತ್ವದ ಕಟ್ಟಡಗಳು ಮತ್ತು ಸ್ವತ್ತುಗಳ ಸಂರಕ್ಷಣೆ:</u>

ಕರ್ನಾಟಕ ಪ್ರವಾಸೋದ್ಯಮವು , ಕರ್ನಾಟಕದಲ್ಲಿ ಪಾರಂಪರಿಕ ಮಹತ್ವದ ಕಟ್ಟಡಗಳ ಸಂರಕ್ಷಣೆ ಮತ್ತು ಸುರಕ್ಷತೆಗಾಗಿ 'ಸಂರಕ್ಷಣೆ' ಯೋಜನೆಯನ್ನು ಅನುಷ್ಠಾನಗೊಳಿಸುವುದಕ್ಕಾಗಿ ಅಗತ್ಯ ನೆರವನ್ನು ಒದಗಿಸಲು ಯೋಜನೆ ರೂಪಿಸಲಾಗುತ್ತಿದೆ.

- <u>ಕಾರ್ಪೊರೇಟ್ ಮತ್ತು ಸಮುದಾಯದ ಬೆಂಬಲ:</u>

ಕರ್ನಾಟಕ ಪ್ರವಾಸೋದ್ಯಮವು ಕಾರ್ಪೊರೇಟ್ ಸಂಸ್ಥೆಗಳ ನೆರವು ಮತ್ತು ಸಮುದಾಯ ಚಾಲಿತ ಉಪಕ್ರಮಗಳ ಮೂಲಕ ಸಾಂಸ್ಕೃತಿಕ ಮತ್ತು ಪಾರಂಪರಿಕ ಪ್ರವಾಸೋದ್ಯಮ ಸ್ವತ್ತುಗಳ ನಿರ್ವಹಣೆ ಮತ್ತು ಪ್ರಚಾರಕ್ಕಾಗಿ ಕಾರ್ಯಕ್ರಮಗಳನ್ನು ಸುಗಮಗೊಳಿಸಲು ಪ್ರಯತ್ನಿಸಲಾಗುತ್ತಿದೆ.

2. **ಸಾಂಸ್ಕೃತಿಕ ಪ್ರವಾಸೋದ್ಯಮ:**

ಕರ್ನಾಟಕದ ವೈವಿಧ್ಯಮಯ ಸಾಂಸ್ಕೃತಿಕ ಪರಂಪರೆಯು ಪ್ರವಾಸಿಗರಿಗೆ ಕಲಿಯಲು, ಅನ್ವೇಷಿಸಲು

ಮತ್ತು ಆನಂದಿಸಲು ಅನುಭವಗಳ ರಾಶಿಯನ್ನೇ ನೀಡುತ್ತದೆ. ಕರ್ನಾಟಕ ಪ್ರವಾಸೋದ್ಯಮವು ಮೂಲ ಶೈಲಿ ಮತ್ತು ನೈಜತೆಯನ್ನು ಸಂರಕ್ಷಿಸುವಾಗ ಕರ್ನಾಟಕದ ಸಂಸ್ಕೃತಿಯನ್ನುಪುನಶ್ಚೇತನಗೊಳಿಸಿ ಉತ್ತೇಜಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮಾಹಿತಿ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಪುರಾತತ್ವ ಇಲಾಖೆ, ಕರ್ನಾಟಕ ರಾಜ್ಯ ಕರಕುಶಲ ಕಲೆಗಳ ಅಭಿವೃದ್ಧಿ ನಿಗಮ ಮತ್ತು ಇತರೆ ಸಂಬಂಧಪಟ್ಟ ಏಜೆನ್ಸಿ / ಇಲಾಖೆಗಳ ನಿಕಟ ಸಮನ್ವಯದೊಂದಿಗೆ ಕಾರ್ಯನಿರ್ವ ಹಿಸಲು ಕ್ರಮವಹಿಸಲಾಗಿದೆ.

- ಕಾರ್ಯಕ್ರಮಗಳು ಮತ್ತು ಹಬ್ಬಗಳು:

ಕರ್ನಾಟಕ ಪ್ರವಾಸೋದ್ಯಮವು ರಾಜ್ಯಾದ್ಯಂತ ಪ್ರಮುಖ ಹಬ್ಬಗಳು ಮತ್ತು ಕಾರ್ಯ ಕ್ರಮಗಳನ್ನು ಆಯೋಜಿಸುವುದಕ್ಕಾಗಿ ಸಂಬಂಧಪಟ್ಟ ಪ್ರಾಧಿಕಾರಗಳೊಂದಿಗೆ ಸಕ್ರಿಯವಾಗಿ ಸಮನ್ವಯ ಸಾಧಿಸಲಾಗುತ್ತಿದೆ. ಇದರಿಂ ದ ಕರ್ನಾಟಕ ವಿವಿಧ ಪ್ರವಾಸೋದ್ಯಮ ಪರಿಕಲ್ಪನೆಗಳಿಗೆ ಪ್ರೋತ್ಸಾಹ ನೀಡಿದಂತಾಗುತ್ತದೆ. ರಾಜ್ಯದ ಕಲೆ, ಕುಶಲಕಲೆ ಮತ್ತು ತಿಂಡಿ-ತಿನಿಸುಗಳಿಗೆ ಪ್ರಾಮುಖ್ಯತೆಯನ್ನು ನೀಡುವುದರೊಂದಿಗೆ ಕರ್ನಾಟಕದ ಸಂಪದ್ಭರಿತ ಮತ್ತು ವೈವಿಧ್ಯಮಯ ಪರಂಪರೆಯನ್ನು ಪ್ರದರ್ಶಿಸಲು ಕಾಲಕಾಲಕ್ಕೆ ಪ್ರಾದೇಶಿಕ ಮತ್ತು ಸ್ಥಳೀಯ ಹಬ್ಬಗಳನ್ನು ಸಹ ಆಯೋಜಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಜಿಲ್ಲಾ ಮಟ್ಟದ ಪ್ರವಾಸೋದ್ಯಮಕ್ಕೆ ಸಂಬಂಧಿಸಿದಂತೆ ಅಧಿಕಾರಿಗಳು ತಮ್ಮತಮ್ಮ ಜಿಲ್ಲೆಗಳಲ್ಲಿ ಕಾರ್ಯ ಕ್ರಮಗಳು, ಹಬ್ಬಗಳು ಮತ್ತು ಉತ್ಸವಗಳ ಮೂಲಕ ಪ್ರವಾಸೋದ್ಯಮ ಕಾರ್ಯ ಚಟುವಟಿಕೆಗಳನ್ನು ಉತ್ತೇಜಿಸಲು ನೆರವು ನೀಡಲು ಯೋಜನೆ ರೂಪಿಸಲಾಗುತ್ತಿದೆ

- ಸಾಂಸ್ಕೃತಿಕ ಸ್ವತ್ತುಗಳ ದತ್ತ ಸಂಚಯ (ಡಾಟಾಬೇಸ್):

ಕರ್ನಾಟಕ ಪ್ರವಾಸೋದ್ಯಮವು, ದತ್ತಸಂಚಯದ ಅಭಿವೃದ್ಧಿಗೆ ಸಂಬಂಧಿಸಿದಂತೆ ಕರ್ನಾಟಕದ ಸಾಂಸ್ಕೃತಿಕ ಸ್ವತ್ತುಗಳನ್ನು ಮ್ಯಾಪಿಂಗ್ ಮಾಡುವಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯೊಂದಿಗೆ ಸಮನ್ವಯ ಸಾಧಿಸಲಾಗುತ್ತಿದೆ. ಈ ದತ್ತ ಸಂಚಯವು ಕಲಾವಿದರು, ನೃತ್ಯಗಾರರು, ಪ್ರದರ್ಶನ ಕಲೆಗಳು ಮತ್ತು ಕರಕುಶಲಕಾರರು ಮತ್ತಿತರ ಸಾಂಸ್ಕೃತಿಕ ಪ್ರವಾಸೋದ್ಯಮಕ್ಕಾಗಿ ನುರಿತ ಕಾರ್ಯ ಪಡೆಯ ಆಕರವಾಗಿಯೂ ಕಾರ್ಯನಿರ್ವ ಹಿಸುತ್ತದೆ. ಕರ್ನಾಟಕದ ಸಂಸ್ಕೃತಿ ಮತ್ತು ಪರಂಪರೆಯನ್ನು ಪ್ರದರ್ಶಿಸಬಲ್ಲಂತಹ ಸೂಕ್ತ ಪ್ರವಾಸೋದ್ಯಮ ಸ್ವತ್ತುಗಳನ್ನು ಗುರುತಿಸಲು ಮತ್ತು ಪ್ರವಾಸೋದ್ಯಮ ಪ್ಯಾಕೇಜ್ ಗಳನ್ನು ಅಭಿವೃದ್ಧಿಪಡಿಸಲು ಪ್ರವಾಸಿ ಸರ್ವೀಸ್ ದಾತರು ಕರ್ನಾಟಕ ಪ್ರವಾಸೋದ್ಯಮದ ಮಾಹಿತಿಯನ್ನು ಬಳಸಿಕೊಳ್ಳುವಂತೆ ಪ್ರೋತ್ಸಾಹಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

- ಪ್ರದರ್ಶನ ಕಲೆ ಮತ್ತು ಸಂಸ್ಕೃತಿಯ ಪ್ರದರ್ಶನ:

ಕರ್ನಾಟಕ ಪ್ರವಾಸೋದ್ಯಮವು ಕನ್ನಡ ಸಂಸ್ಕೃತಿ ಇಲಾಖೆಯ ನಿಕಟ ಸಹಯೋಗದೊಂದಿಗೆ ಪ್ರವಾಸಿಗರು ಸಾಂಸ್ಕೃತಿಕ ಪ್ರವಾಸೋದ್ಯಮದ ಅನುಭವ ಪಡೆಯುವುದಕ್ಕೆ ಮತ್ತು ಭಾಗವಹಿಸುವುದಕ್ಕೆ ಅವರಿಗೆ ಸೂಕ್ತವಾದಂತಹ ಸೌಲಭ್ಯಗಳನ್ನು, ಸ್ಥಳಾವಕಾಶಗಳನ್ನು ಮತ್ತು ವೇದಿಕೆಗಳನ್ನು ಕಲ್ಪಿಸಿಕೊಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಅಂಥ ಸೌಲಭ್ಯಗಳನ್ನು, ಸ್ಥಳಾವಕಾಶಗಳನ್ನು ಮತ್ತು ವೇದಿಕೆಗಳನ್ನು ಕಲ್ಪಿಸಿಕೊಡಲು ಅಥವಾ ಒದಗಿಸಲು ಸಂಬಂಧಪಟ್ಟ ಏಜೆನ್ಸಿಗಳ ಮತ್ತು ಪ್ರಮುಖ ಹಿತಾಸಕ್ತಿದಾರರ ನೆರವನ್ನು ಪಡೆಯಲು ಕ್ರಮ ಕೈಗೊಳ್ಳಲಾಗುತ್ತಿದೆ

- ಮೈಸೂರನ್ನು ಸಾಂಸ್ಕೃತಿಕ ಕೇಂದ್ರವಾಗಿ ಅಭಿವೃದ್ಧಿಪಡಿಸುವುದು:

ಮೈಸೂರನ್ನು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದು ಪರಿಗಣಿಸಲಾಗಿದೆ ಮತ್ತು ಇಲಾಖೆಯು ಈ ನಗರವನ್ನು ಜಾಗತಿಕವಾಗಿ ಪ್ರಮುಖ ಪ್ರವಾಸೋದ್ಯಮ ತಾಣವನ್ನಾಗಿ ಅಭಿವೃದ್ಧಿಪಡಿಸುವುದಕ್ಕೆ ನಿರ್ದಿಷ್ಟ ಕಾರ್ಯಕ್ರಮಗಳನ್ನು ಕೈಗೊಳ್ಳಲು ಕ್ರಮವಹಿಸಲಾಗುತ್ತಿದೆ. ಇದಲ್ಲದೆ, ಇಲಾಖೆಯು, ಸಾಂಸ್ಕೃತಿಕ ಚಟುವಟಿಕೆಗಳು, MICE ಮತ್ತು ಮನರಂಜನೆಗಳಿಗಾಗಿ ವರ್ಷ ಪೂರ್ತಿ ಸೌಲಭ್ಯಗಳನ್ನು ಒದಗಿಸಿ, ಮೈಸೂರಿನಲ್ಲಿರುವ KEA ವಸ್ತುಪ್ರದರ್ಶನ ಮೈದಾನವನ್ನು ಪ್ರವಾಸೋದ್ಯಮ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸಲು ಕರ್ನಾಟಕ ವಸ್ತುಪ್ರದರ್ಶನ ಪ್ರಾಧಿಕಾರಕ್ಕೆ ನೆರವು ನೀಡಲು ಯೋಜನೆ ರೂಪಿಸಲಾಗುತ್ತಿದೆ.

- ಸಾಂಸ್ಕೃತಿಕ ಗ್ರಾಮದ ಅಭಿವೃದ್ಧಿ:

ಕರ್ನಾಟಕ ಪ್ರವಾಸೋದ್ಯಮ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಗುರುತಿಸಿ ಸೂಚಿಸಿರುವ ಸ್ಥಳಗಳಲ್ಲಿ ಸಾಂಸ್ಕೃತಿಕ ಗ್ರಾಮವನ್ನು ಅಭಿವೃದ್ಧಿಪಡಿಸಲು ಕ್ರಮವಹಿಸಲಾಗುವುದು.

### 3. ಧಾರ್ಮಿಕ ಪ್ರವಾಸೋದ್ಯಮ:

ಕರ್ನಾಟಕದ ವಿವಿಧ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಂಸ್ಥೆಗಳನ್ನು ಪರಿಗಣನೆಗೆ ತೆಗೆದುಕೊಂಡು ಆಧ್ಯಾತ್ಮಿಕಪ್ರವಾಸೋದ್ಯಮ ವಲಯಗಳ ಸೃಜನೆಗಾಗಿ ನೆರವನ್ನು ನೀಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಕರ್ನಾಟಕ ಪ್ರವಾಸೋದ್ಯಮವು ಅಂತಹ ಆಧ್ಯಾತ್ಮಿಕ ಪ್ರವಾಸಿ ತಾಣಗಳಲ್ಲಿ ವಸತಿ ಸೌಲಭ್ಯಗಳು ಮತ್ತು ಪ್ರವಾಸಿ ಸೌಲಭ್ಯಗಳ ಲಭ್ಯತೆ ಮತ್ತು ಗುಣಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸಲಾಗುತ್ತಿದೆ. ರಾಜ್ಯದಲ್ಲಿನ 60 ವರ್ಷ ವಯಸ್ಸಿಗೂ ಮೇಲ್ಪಟ್ಟ ಮತ್ತು ಬಡತನ ರೇಖೆಗಿಂತ ಕೆಳಗಿರುವ ಆಯ್ದ ಫಲಾನುಭವಿಗಳು ಹೆಸರಾಂತ ತೀರ್ಥಕ್ಷೇತ್ರಗಳಿಗೆ ಭೇಟಿ ನೀಡಲು ಸಾಧ್ಯವಾಗುವಂತೆ 'ಜೀವನ ಚೈತ್ರ ಯಾತ್ರೆ' ಕಾರ್ಯಕ್ರಮದಡಿ ಅವಕಾಶ ಕಲ್ಪಿಸಲು ಯೋಜನೆ ರೂಪಿಸಲಾಗುತ್ತಿದೆ.

**ಪ್ರವಾಸೋದ್ಯಮ ಸರ್ಕ್ಯೂಟ್ ಅಭಿವೃದ್ಧಿ:**

ಇಲಾಖೆಯು ಈ ಕೆಳಕಂಡ ಪರಿಕಲ್ಪನೆಗಳ ಅಡಿಯಲ್ಲಿ ಪ್ರಮುಖ ಪ್ರವಾಸೋದ್ಯಮ ಸ್ಥಳಗಳನ್ನು ಸಂಯೋಜಿಸುವ ಪ್ರವಾಸೋದ್ಯಮ ಸರ್ಕ್ಯೂಟ್ ಅಭಿವೃದ್ಧಿಯನ್ನು ಕೈಗೆತ್ತಿಕೊಳ್ಳಲು ಕ್ರಮವಹಿಸಲಾಗಿದೆ.

- ಪರಿಸರ ಪ್ರವಾಸೋದ್ಯಮ
- ಪಾರಂಪರಿಕ ಪ್ರವಾಸೋದ್ಯಮ
- ಗ್ರಾಮೀಣ ಪ್ರವಾಸೋದ್ಯಮ
- ಆಧ್ಯಾತ್ಮಿಕ ಪ್ರವಾಸೋದ್ಯಮ
- ವನ್ಯಜೀವಿ ಪ್ರವಾಸೋದ್ಯಮ

ರಾಜ್ಯದ ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳಿಂದ ಪ್ರವಾಸೋದ್ಯಮ ಸರ್ಕ್ಯೂಟ್ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಸ್ತಾವನೆಗಳನ್ನು ಪಡೆಯಲಾಗುತ್ತಿದ್ದು, ಈ ಬಗ್ಗೆ ಇಲಾಖೆಯು ಹಂತ-ಹಂತವಾಗಿ ಪರಿಶೀಲಿಸಿ ಆಯವ್ಯಯದಲ್ಲಿ ಒದಗಿಸಿರುವ ಅನುದಾನದ ಲಭ್ಯತೆಗೆ ಅನುಗುಣವಾಗಿ ರಾಜ್ಯದ ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಪ್ರವಾಸೋದ್ಯಮದ ಸಮಗ್ರ ಅಭಿವೃದ್ಧಿ ಪಡಿಸಲು ಕ್ರಮ ಕೈಗೊಳ್ಳಲಾಗುವುದು.